# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 900 (೭೦೭) |
| ಸದಸ್ಯರ ಹೆಸರು | : | ಶ್ರೀ ಹೆಚ್.ಎಂ. ರಮೇಶ ಗೌಡ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | : | 10-03-2021. |
| ಉತ್ತರಿಸುವ ಸಚಿವರು | : | ಮಾನ್ಯ ಉಪಮುಖ್ಯಮಂತ್ರಿಗಳು, ಲೋಕೋಪಯೋಗಿ ಇಲಾಖೆ |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯಾದಾದ್ಯಂತ ಬೃಹತ್ ಹೆದ್ದಾರಿಗಳ ನಿರ್ಮಾಣಕ್ಕಾಗಿ ಹಾಗೂ ಎಕ್ಸ್‌ಪ್ರೆಸ್ ಕಾರಿಡಾರ್ ನಿರ್ಮಾಣಕ್ಕಾಗಿ ಹಾಲಿ ಇರುವ ರಸ್ತೆಗಳನ್ನು ಅಗೆದಿದ್ದು, ಕಾಮಗಾರಿ ನಿಧಾನಗತಿಯಲ್ಲಿ ಸಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಎಕ್ಸ್‌ಪ್ರೆಸ್ ವೇ ಕಾರಿಡಾರ್ ಕಾಮಗಾರಿಗಳು ಭಾರತೀಯ ರಾಷ್ಟ್ರೀಯ ಹೆದ್ದಾರಿಗಳ ಪ್ರಾಧಿಕಾರದ ವ್ಯಾಪ್ತಿಯಲ್ಲಿ ವೇಳಾಪಟ್ಟಿಯ ಪ್ರಕಾರ ಪ್ರಗತಿಯಲ್ಲಿವೆ. ಆದಾಗ್ಯೂ 2 ಯೋಜನೆಗಳು ಅಂದರೆ ಹೊಸಪೇಟೆ – ಬಳ್ಳಾರಿ ಭಾಗದ ರಸ್ತೆ ಮತ್ತು ಹಾಸನ – ಮಾರನಹಳ್ಳಿ ಭಾಗದ ಕಾಮಗಾರಿಗಳು ಗುತ್ತಿಗೆದಾರರ ಹಣಕಾಸಿನ ಸಮಸ್ಯೆಯಿಂದಾಗಿ ಮಂದಗತಿಯಲ್ಲಿವೆ ಎಂದು ಭಾರತೀಯ ರಾಷ್ಟ್ರೀಯ ಹೆದ್ದಾರಿಗಳ ಪ್ರಾಧಿಕಾರದವರು ವರದಿಸಿರುತ್ತಾರೆ. |
| ಆ) | ಬಂದಿದ್ದಲ್ಲಿ, ಶೀಘ್ರವಾಗಿ ರಸ್ತೆ ಕಾಮಗಾರಿ ಪೂರ್ಣಗೊಳಿಸಲು ಸರ್ಕಾರ ಯಾವ ಯಾವ ಕ್ರಮಗಳನ್ನು ಕೈಗೊಳ್ಳಲಾಗುತ್ತದೆ; | ಸಮಸ್ಯೆಗಳನ್ನು ಪರಿಹರಿಸಲು ಮತ್ತು ಈ ಯೋಜನೆಗಳನ್ನು ಶೀಘ್ರವಾಗಿ ಪೂರ್ಣಗೊಳಿಸಲು ರಾಜ್ಯ ಸರ್ಕಾರ ಮತ್ತು ಸಂಬಂಧಪಟ್ಟ ಗುತ್ತಿಗೆದಾರರೊಂದಿಗೆ ನಿಯಮಿತವಾಗಿ ಸಭೆಗಳನ್ನು ನಡೆಸಲಾಗಿದೆ. |
| ಇ) | ಬೆಂಗಳೂರು ಪೂನಾ ರಾಷ್ಟ್ರೀಯ ಹೆದ್ದಾರಿ ಎನ್.ಹೆಚ್-4 ಬಂಕಾಪುರದಿಂದ ಹಾವೇರಿಯವರೆಗೆ ರಸ್ತೆ ಕಾಮಗಾರಿ ವಿಳಂಭವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂಕಾಪುರ – ಹಾವೇರಿ ರಸ್ತೆಯು ಹುಬ್ಬಳ್ಳಿ – ಹಾವೇರಿ ಯೋಜನೆಯ ಭಾಗವಾಗಿದ್ದು, ಈ ಕೆಳಕಂಡ ಕಾರಣಗಳಿಂದಾಗಿ ವಿಳಂಬವಾಗಿರುತ್ತದೆ ಎಂದು ಭಾರತೀಯ ರಾಷ್ಟ್ರೀಯ ಹೆದ್ದಾರಿಗಳ ಪ್ರಾಧಿಕಾರದವರು ವರದಿಸಿರುತ್ತಾರೆ.<br>1. ಅಂಡರ್‌ಪಾಸ್ ಮತ್ತು ಹೆಚ್ಚಿನ ಭೂ ಪರಿಹಾರದ ಬೇಡಿಕೆಗಾಗಿ ಗ್ರಾಮಸ್ಥರಿಂದ ಕೆಲಸ ನಿಲ್ಲಿಸಿರುವುದು.<br>2. ಭೂಸ್ವಾಧೀನದಲ್ಲಿ ನಿಧಾನ ಪ್ರಗತಿ.<br>3. 2019 ರಲ್ಲಿ ಅನಿರೀಕ್ಷಿತ ಮಳೆ.<br>4. ಕೋವಿಡ್ 19 ಪಿಡುಗಿನಿಂದಾಗಿ |
| ಈ) | ಬೆಂಗಳೂರು – ಮಂಗಳೂರು ಹೆದ್ದಾರಿಯಲ್ಲಿ ಹಾಸನದಿಂದ ಸಕಲೇಶಪುರ ಮಾರ್ಗ ಕಳೆದ ಎರಡು ವರ್ಷಗಳಿಂದ ಸಂಪೂರ್ಣ ಹಾಳಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೆಂಗಳೂರು – ಮಂಗಳೂರು ಹೆದ್ದಾರಿಯಲ್ಲಿ ಹಾಸನದಿಂದ ಸಕಲೇಶಪುರ ಮಾರ್ಗದ ರಸ್ತೆಯನ್ನು ಗುತ್ತಿಗೆದಾರರು ಸಂಚಾರಿ ಯೋಗ್ಯ ಸ್ಥಿತಿಯಲ್ಲಿ ನಿರ್ವಹಿಸಲಾಗುತ್ತಿದೆ ಎಂದು ಭಾರತೀಯ ರಾಷ್ಟ್ರೀಯ ಹೆದ್ದಾರಿಗಳ ಪ್ರಾಧಿಕಾರದವರು ವರದಿಸಿರುತ್ತಾರೆ. |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಉ) | ಬಂದಿದ್ದಲ್ಲಿ ಶೀಘ್ರ ಕಾಮಗಾರಿ ಪೂರ್ಣಕ್ಕೆ ಯಾವ ಕ್ರಮ ಕೈಗೊಳ್ಳಲಾಗಿದೆ; ಈ ಎರಡೂ ಯೋಜನೆಗಳನ್ನು ಪೂರ್ಣಗೊಳಿಸಲು ಅಂತಿಮ ಗಡುವು ನೀಡಲಾಗಿದೆಯೇ? (ಮಾಹಿತಿ ನೀಡುವುದು) | ಸಮಸ್ಯೆಗಳನ್ನು ಪರಿಹರಿಸಲು ಮತ್ತು ಈ ಯೋಜನೆಗಳನ್ನು ಶೀಘ್ರವಾಗಿ ಪೂರ್ಣಗೊಳಿಸಲು ರಾಜ್ಯ ಸರ್ಕಾರ ಮತ್ತು ಸಂಬಂಧಪಟ್ಟ ಗುತ್ತಿಗೆದಾರರೊಂದಿಗೆ ನಿಯಮಿತವಾಗಿ ಸಭೆಗಳನ್ನು ನಡೆಸಲಾಗಿದೆ. ಮೇಲಿನ ಎರಡೂ ಕಾಮಗಾರಿಗಳನ್ನು ದಿನಾಂಕಃ31–03–2022 ರೊಳಗೆ ಪೂರ್ಣಗೊಳಿಸಲಾಗುವುದೆಂದು ಭಾರತೀಯ ರಾಷ್ಟ್ರೀಯ ಹೆದ್ದಾರಿಗಳ ಪ್ರಾಧಿಕಾರದವರು ವರದಿಸಿರುತ್ತಾರೆ. |

ಕಡತ ಸಂಖ್ಯೆ: ಲೋಇ 77 ಸಿಎನ್‌ಹೆಚ್ 2021 (ಇ)

(ಗೋವಿಂದ.ಎಂ.ಕಾರಜೋಳ)
ಉಪ ಮುಖ್ಯಮಂತ್ರಿಗಳು
ಲೋಕೋಪಯೋಗಿ ಇಲಾಖೆ